KA / BG-GPO / 2515 / WPP-47 / 2006-2008

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೧ | ಬೆಂಗಳೂರು, ಗುರುವಾರ, ಮಾರ್ಚ್ ೦೯, ೨೦೦೬ (ಫಾಲ್ಗುಣ ೧೮, ಶಕ ವರ್ಷ ೧೯೨೭) | ಸಂಚಿಕೆ ೧೦

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ:** ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ನೇರ ಖರೀದಿ ಮೂಲಕ ಭೂ ಖರೀದಿ ಮಾಡಲು ಭೂ ಬೆಲೆ ನಿಗದೀಕರಣ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಪತ್ರ ಸಂಖ್ಯೆ : ಕವಿಪ್ರನಿನಿ/ಬಿ7/1425/2004–05 ದಿನಾಂಕ : 26.9.2005.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 26.9.2005 ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದವರು, ಕರ್ನಾಟಕ ಸರ್ಕಾರವು ಅಧಿಸೂಚನೆ ಸಂಖ್ಯೆ : ಸಂವ್ಯಶಾಇ 47 ಶಾಸನ 2001 ದಿನಾಂಕ : 23.04.2003 ರಲ್ಲಿ ಕರ್ನಾಟಕ ಭೂಸುಧಾರಣೆ ಕಾಯ್ದೆ 1961, ನಿಯಮ 81 ಕ್ಕೆ ತಿದ್ದುಪಡಿ ಮಾಡಿ ಕೆ.ಹೆಚ್.ಬಿ., ಕೆ.ಐ.ಎ.ಡಿ.ಬಿ ಮುಂತಾದ ಸಂಸ್ಥೆಗಳಂತೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಭೂಮಾಲೀಕರಿಂದ ನೇರ ಖರೀದಿ ಮುಖಾಂತರ ಭೂಮಿಯನ್ನು ಖರೀದಿಸಲು ಅವಕಾಶ ಮಾಡಿಕೊಟ್ಟಿರುತ್ತದೆ. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಭೂಮಾಲೀಕರೊಂದಿಗೆ ಸಂಧಾನ ನಡೆಸಿ ಸರ್ಕಾರ ನಿಗಧಿಪಡಿಸಿದ ಮಾರ್ಗಸೂಚಿ ಬೆಲೆ ಮತ್ತು ಇತ್ತೀಚಿನ ಮಾರುಕಟ್ಟೆ ಬೆಲೆಯನ್ನು ಗಣನೆಗೆ ತೆಗೆದುಕೊಂಡು ಜಮೀನಿನ ಬೆಲೆಯನ್ನು ನಿಗಧಿಪಡಿಸಲು ಸಂಬಂಧಿಸಿದ ಜಿಲ್ಲಾಧಿಕಾರಿಗಳನ್ನು ಒಳಗೊಂಡ ಒಂದು ಸಮಿತಿಯನ್ನು ರಚಿಸಲು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 187 ಇಇಬಿ 2005, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2006**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಉಪ–ಕೇಂದ್ರ ಸ್ಥಾಪನೆಗೆ ಹಾಗೂ ಇತರ ಪ್ರಾಜೆಕ್ಟ್‌ಗಳಿಗೆಬೇಕಾದ ಭೂಮಿಯನ್ನು ನೇರವಾಗಿ ಭೂಮಾಲಿಕರಿಂದ ಖರೀದಿಸಲು ಭೂ ಬೆಲೆ ನಿಗಧೀಕರಣ ಸಮಿತಿಯನ್ನು ಈ ಕೆಳಕಂಡಂತೆ ರಚಿಸಲಾಗಿದೆ.

| | | |
|---|---|---|
| 1. | ಸಂಬಂಧಿಸಿದ ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2. | ಸಂಬಂಧಿಸಿದ ಸಹಾಯಕ ಕಮೀಷನರ್ | ಸದಸ್ಯರು |
| 3. | ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಸಂಬಂಧಿಸಿದ ಪ್ರಸರಣಾವಲಯದ ಮುಖ್ಯ ಇಂಜಿನಿಯರ್ (ವಿ) | ಸದಸ್ಯರು |
| 4. | ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಸಂಬಂಧಿಸಿದ ಪ್ರಸರಣಾ ವೃತ್ತದ ಅಧೀಕ್ಷಕ ಇಂಜಿನಿಯರ್ (ವಿ) | ಸದಸ್ಯರು ಹಾಗೂ ಸಂಚಾಲಕರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್. 271

### ವಸತಿ ಸಚಿವಾಲಯ

**ವಿಷಯ:** ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ಉಡುಪಿ ನಗರದ ಕೊಳಚೆ ಪ್ರದೇಶಗಳ ಉನ್ನತೀಕರಣ ಮತ್ತು ಅಭಿವೃದ್ಧಿಪಡಿಸುವ ಕಾಮಗಾರಿ ಕುರಿತು–ಮಂಡಳಿ ಅಧಿಕಾರ ವ್ಯಾಪ್ತಿ ಮೀರಿರುವ ವರ್ಕ್‌ಸ್ಲಿಪ್‌ಗೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ವಇ 34 ಕೊಮಂಲೆ 2002(1) ದಿನಾಂಕ: 13.05.2003 ಮತ್ತು 22.05.2003.
2) ಆಯುಕ್ತರು, ಕಕೊನಿಮ ಇವರ ಪತ್ರ ಸಂಖ್ಯೆ: ಕಕೊನಿಮ / ಆಯುಕ್ತರು / ನಿಜ್ಯೋ / ಉಡುಪಿ / 1ನೇ ಹಂತ / 05–06 / 1059, ದಿನಾಂಕ: 18.11.2005.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಉಡುಪಿ ನಗರದ ವ್ಯಾಪ್ತಿಯಲ್ಲಿ ಬರುವ ಕೊಳಚೆ ಪ್ರದೇಶಗಳಲ್ಲಿನ ಕೊಳಚೆ ನಿವಾಸಿಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ರೂ. 48.94 ಲಕ್ಷಗಳ ಅಂದಾಜು ಪಟ್ಟಿಯಂತೆ ಕಾಮಗಾರಿಗಳನ್ನು ನಿರ್ವಹಿಸಲು ಅನುಮೋದಿಸಿದ್ದು, ಇದರಲ್ಲಿ ರೂ. 55,45,000/– ಗಳಿಗೆ ಟೆಂಡರ್ ಕರೆಯಲಾಗಿದೆ. ಟೆಂಡರ್ ನಲ್ಲಿ ಅತಿ ಕಡಿಮೆ ದರ ಅಂದರೆ ಟೆಂಡರ್ ಕರೆಯಲಾದ ಮೊತ್ತಕ್ಕಿಂತ ಶೇ. 14 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಗಳ ಅಂದಾಜು ಪಟ್ಟಿಗೆ ಟೆಂಡರ್ ನಿಯಮದಂತೆ ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಅನುಮೋದನೆ ಹಾಗೂ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯ ಟೆಂಡರ್ ಅಧಿಸೂಚನೆ ದಿನಾಂಕ: 13.12.2002 ಹಾಗೂ 12.09.2003 ರಲ್ಲಿನ ಟೆಂಡರ್ ಷೆಡ್ಯೂಲ್‌ಗಳ ಷರತ್ತುಗಳಂತೆ ಕಾಮಗಾರಿಗಳನ್ನು ನಿರ್ವಹಿಸಲು ಗುತ್ತಿಗೆದಾರರಾದ ಶ್ರೀ ಟಿ. ಶಿವಕುಮಾರ್, ಹೊಳೆನರಸೀಪುರ ಇವರಿಗೆ ನೀಡಲು ಸರ್ಕಾರ ಮಂಜೂರು ನೀಡಿದೆ.

ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪ್ರಸ್ತಾವನೆಯಲ್ಲಿ ದಿನಾಂಕ: 30.11.2004 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯಮಟ್ಟದ ಯೋಜನಾ ನಿಯಾಮಕ ಸಮಿತಿ ಸಭೆಯಲ್ಲಿ ಚರ್ಚಿಸಿ, ಮೊದಲ ಹಂತದಲ್ಲಿ ಗುತ್ತಿಗೆದಾರರು ನಿರ್ವಹಿಸಿರುವ ಕಾಮಗಾರಿಗಳ ಪರಿವೀಕ್ಷಣೆ ಮಾಡಿ ವರದಿ ಸಲ್ಲಿಸಲು ಕಾಮಗಾರಿಗಳಲ್ಲಿ ಮೂಲ ಮಂಜೂರಾತಿಯಲ್ಲಿ ಬದಲಾವಣೆಯಾಗಿದ್ದಲ್ಲಿ ಬದಲಾವಣೆಯಾದ ಕಾಮಗಾರಿಗಳ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಮಂಜೂರಾತಿ ಪಡೆಯಲು ತಿಳಿಸಲಾಗಿದೆ. ಅದರಂತೆ ಮಂಡಳಿಯ ತಾಂತ್ರಿಕ ನಿರ್ದೇಶಕರು, ಉಡುಪಿ ನಗರದ ಹೆಚ್ಚುವರಿ ಕಾಮಗಾರಿಗಳು ಕೊಳಚೆ ಪ್ರದೇಶಗಳಿಗೆ ಅಗತ್ಯ ಹಾಗೂ ಕನಿಷ್ಠ ಮೂಲಭೂತ ಸೌಕರ್ಯಗಳನ್ನು ಅಗತ್ಯವಾಗಿ ನಿರ್ವಹಿಸಬೇಕಾಗಿರುವುದರಿಂದ ಈ ಕಾಮಗಾರಿಗಳ ಅವಶ್ಯಕತೆ ಆಧರಿಸಿ ಜಿಲ್ಲಾ ಮಟ್ಟದ ಯೋಜನಾ ನಿಯಾಮಕ ಸಮಿತಿ ಸಭೆಯಲ್ಲಿ ಈ ಹೆಚ್ಚುವರಿ ಕಾಮಗಾರಿಗಳು ಅವಶ್ಯಕವೆಂದು ಪರಿಗಣಿಸಿ ನಿರ್ಣಯ ಕೈಗೊಂಡಿರುವುದರಿಂದ ರಸ್ತೆ ಮತ್ತು ಮೇಲ್ಚಾವಣಿ ಕಾಮಗಾರಿಗಳನ್ನು ಕೈಗೊಂಡಿರುವುದಾಗಿ ತಿಳಿಸಿ ಹೆಚ್ಚುವರಿ ಪ್ರಮಾಣದಲ್ಲಿ ನಿರ್ವಹಿಸಿರುವ ಕಾಮಗಾರಿಗಳಿಗೆ ವರ್ಕ್‌ಸ್ಲಿಪ್‌ಗಳನ್ನು ತಯಾರಿಸಿದ್ದು, ಸದರಿ ವರ್ಕ್‌ಸ್ಲಿಪ್‌ಗಳ ಮೊತ್ತವು ರೂ. 13,31,668.38 ಗಳಾಗಿದ್ದು, ಈ ಮೊತ್ತವನ್ನು ಮೂಲ ಅಂದಾಜು ಮೊತ್ತ ರೂ. 48,94,000/– ಗಳಿಗೆ ಹೋಲಿಸಿದಾಗ ಶೇ. 27.21 ರಷ್ಟಾಗಿದ್ದು, ಈ ಯೋಜನೆಯು ಸಂಪೂರ್ಣ ಫಲಪ್ರದ ಆಗಬೇಕಾದಲ್ಲಿ ಕೆಲವು ಹೆಚ್ಚುವರಿ ಕಾಮಗಾರಿಗಳು ಅನಿವಾರ್ಯವಾಗಿರುವುದರಿಂದ ಹಾಗೂ ಇದು ಮಂಡಳಿಯ ಅಧಿಕಾರಿ ವ್ಯಾಪ್ತಿ ಮೀರಿರುತ್ತದೆ. ಪ್ರಸ್ತುತ ಕಾಮಗಾರಿಗಳು ಬಹುತೇಕ ಪೂರ್ಣಗೊಂಡಿದ್ದು, ಒಟ್ಟು ಯೋಜನಾ ಮೊತ್ತ (Final cost of the work) ರೂ. 54,43,558/– ಗಳಾಗುವ ಸಂಭವವಿದ್ದು, ದಿನಾಂಕ 20.08.2004 ರಂದು ರಾಜ್ಯ ಮಟ್ಟದ ಯೋಜನಾ ನಿಯಾಮಕ ಸಮಿತಿಯ ತೀರ್ಮಾನದಂತೆ ಈ ಮೊತ್ತವನ್ನು ಯಾವುದೇ ಆರ್ಥಿಕ ಹೊರೆ ಇಲ್ಲದೆ ಟೆಂಡರ್ ಆದ ಮಿತಿಯಲ್ಲೇ ಭರಿಸಲಾಗುವುದರಿಂದ ರೂ. 13,31,668.38/– ಲಕ್ಷಗಳ (subject-2) ವರ್ಕ್‌ಸ್ಲಿಪ್‌ನ ಹೆಚ್ಚುವರಿ ಅನುಮೋದನೆ ನೀಡಲು ಕೋರಿರುತ್ತಾರೆ.

ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 66 ಕೊಮಂಲೆ 2005, ಬೆಂಗಳೂರು, ದಿನಾಂಕ: 02ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಉಡುಪಿ ನಗರದಲ್ಲಿ ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ರೂ. 48,94,000/– ಗಳ ಅಂದಾಜು ಪಟ್ಟಿಯ ಕಾಮಗಾರಿಗಳಿಗೆ ಮಂಜೂರಾತಿ ನೀಡಿದ್ದು, ಕಾಮಗಾರಿ ಬದಲಾವಣೆ ಹಾಗೂ ಹೆಚ್ಚುವರಿ ಪ್ರಮಾಣದಲ್ಲಿ ನಿರ್ವಹಿಸಿರುವ ಕಾಮಗಾರಿಗಳಿಗೆ ಹೆಚ್ಚುವರಿ ಪ್ರಮಾಣದಲ್ಲಿ ನಿರ್ವಹಿಸಿರುವ ಕಾಮಗಾರಿಗಳಿಗೆ ತಯಾರಿಸಿರುವ ವರ್ಕ್‌ಸ್ಲಿಪ್ ಮೊತ್ತ ರೂ. 13,31,668.38 ಗಳಾಗಿದ್ದು, ಇದು ಮೂಲ ಅಂದಾಜು ಮೊತ್ತ ರೂ. 48,94,000/– ಹೋಲಿಸಿದಾಗ ಶೇ. 27.21 ರಷ್ಟಾಗಿರುತ್ತದೆ. ಇದು ಒಟ್ಟು ಅಂತಿಮ ಯೋಜನಾ ಮೊತ್ತ (Final cost of the work) ರೂ. 54,43,558/– ಗಳಾಗುವ ಸಂಭವವಿದ್ದು, ಒಟ್ಟಾರೆ ಅಂದಾಜು ಮೊತ್ತದ ಮಿತಿಯಲ್ಲೇ ಇರುವುದರಿಂದ ದಿನಾಂಕ 13.05.2003ರ ಆದೇಶದಲ್ಲಿ ವಿಧಿಸಿರುವ ಷರತ್ತುಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಷರತ್ತಿಗೆ ಒಳಪಟ್ಟು ರೂ. 13,31,668.38/– ಗಳ ವರ್ಕ್‌ಸ್ಲಿಪ್‌ಗೆ ಸರ್ಕಾರ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 223

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ.

**ವಿಷಯ:** ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ಶಿವಮೊಗ್ಗ ನಗರದ ಕೊಳಚೆ ಪ್ರದೇಶಗಳ ಉನ್ನತೀಕರಣ ಮತ್ತು ಅಭಿವೃದ್ಧಿಪಡಿಸುವ ಕಾಮಗಾರಿ ಕುರಿತು–ಮಂಡಳಿ ಅಧಿಕಾರ ವ್ಯಾಪ್ತಿ ಮೀರಿರುವ ವರ್ಕ್‌ಸ್ಲಿಪ್‌ಗೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ವಇ 34 ಕೊಮಂಲೆ 2002(1) ದಿನಾಂಕ: 13.05.2003 ಮತ್ತು 22.05.2003.
2) ಆಯುಕ್ತರು, ಕಕೊನಿಮ ಇವರ ಪತ್ರ ಸಂಖ್ಯೆ: ಕಕೊನಿಮ / ಆಯುಕ್ತರು / ನಿಜ್ಯೋ / ಶಿವಮೊಗ್ಗ / 2005–06 / 1060, ದಿನಾಂಕ: 18.11.2005.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶಿವಮೊಗ್ಗ ನಗರದ ವ್ಯಾಪ್ತಿಯಲ್ಲಿ ಬರುವ ಕೊಳಚೆ ಪ್ರದೇಶಗಳಲ್ಲಿನ ಕೊಳಚೆ ನಿವಾಸಿಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ರೂ. 196.32 ಲಕ್ಷಗಳ ಅಂದಾಜು ಪಟ್ಟಿಯಂತೆ ಕಾಮಗಾರಿಗಳನ್ನು ನಿರ್ವಹಿಸಲು (2002–03) ಅನುಮೋದಿಸಿದ್ದು, ಇದರಲ್ಲಿ ರೂ. 211.20 ಗಳಿಗೆ ಟೆಂಡರ್ ಕರೆಯಲಾಗಿದೆ. ಟೆಂಡರ್ ನಲ್ಲಿ ಅತಿ ಕಡಿಮೆ ದರ ಅಂದರೆ ಟೆಂಡರ್ ಕರೆಯಲಾದ ಮೊತ್ತಕ್ಕಿಂತ ಶೇ. 12 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಗಳ ಅಂದಾಜು ಪಟ್ಟಿಗೆ ಟೆಂಡರ್ ನಿಯಮದಂತೆ ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಅನುಮೋದನೆ ಹಾಗೂ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯ ಟೆಂಡರ್ ಅಧಿಸೂಚನೆ ದಿನಾಂಕ: 13.12.2002 ರಲ್ಲಿನ ಟೆಂಡರ್ ಷೆಡ್ಯೂಲ್‌ಗಳ ಷರತ್ತುಗಳಂತೆ ಕಾಮಗಾರಿಗಳನ್ನು ನಿರ್ವಹಿಸಲು ಗುತ್ತಿಗೆದಾರರಾದ ಶ್ರೀ ಟಿ. ಶಿವಕುಮಾರ್, ಹೊಳೆನರಸೀಪುರ ಇವರಿಗೆ ನೀಡಲು ಸರ್ಕಾರ ಮಂಜೂರು ನೀಡಿದೆ.

ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪ್ರಸ್ತಾವನೆಯಲ್ಲಿ ದಿನಾಂಕ: 30.11.2004 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯಮಟ್ಟದ ಯೋಜನಾ ನಿಯಾಮಕ ಸಮಿತಿ ಸಭೆಯಲ್ಲಿ ಚರ್ಚಿಸಿ, ಮೊದಲ ಹಂತದಲ್ಲಿ ಗುತ್ತಿಗೆದಾರರು ನಿರ್ವಹಿಸಿರುವ ಕಾಮಗಾರಿಗಳ ಪರಿವೀಕ್ಷಣೆ ಮಾಡಿ ವರದಿ ಸಲ್ಲಿಸಲು ಕಾಮಗಾರಿಗಳಲ್ಲಿ ಮೂಲ ಮಂಜೂರಾತಿಯಲ್ಲಿ ಬದಲಾವಣೆಯಾಗಿದ್ದಲ್ಲಿ ಬದಲಾವಣೆಯಾದ ಕಾಮಗಾರಿಗಳ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಮಂಜೂರಾತಿ ಪಡೆಯಲು ತಿಳಿಸಲಾಗಿದೆ. ಅದರಂತೆ ಮಂಡಳಿಯ ತಾಂತ್ರಿಕ ನಿರ್ದೇಶಕರು, ಶಿವಮೊಗ್ಗ ನಗರದ ರಸ್ತೆ, ಚರಂಡಿ, ಅಡ್ಡಮೋರಿ, ನೀರು ಸರಬರಾಜು ವ್ಯವಸ್ಥೆ, ಸೆಪ್ಟಿಕ್ ಟ್ಯಾಂಕ್ ಸೋಕಪಿಟ್, ಸ್ಟೀಲ್ ತಡೆಗೋಡೆ, ನೈರ್ಮಲೀಕರಣ ಹಾಗೂ ಹೊರವಿದ್ಯುದ್ದೀಕರಣಗಳ ಕಾಮಗಾರಿಗಳನ್ನು ನಿರ್ವಹಿಸುವಲ್ಲಿ ಹೆಚ್ಚುವರಿ ಕಾಮಗಾರಿಗಳು ಕೊಳಚೆ ಪ್ರದೇಶಗಳಿಗೆ ಅಗತ್ಯ ಹಾಗೂ ಕನಿಷ್ಠ ಮೂಲಭೂತ ಸೌಕರ್ಯಗಳನ್ನು ಅಗತ್ಯವಾಗಿ ನಿರ್ವಹಿಸಬೇಕಾಗಿರುವುದರಿಂದ ಈ ಕಾಮಗಾರಿಗಳ ಅವಶ್ಯಕತೆ ಆಧರಿಸಿ ಜಿಲ್ಲಾ ಮಟ್ಟದ ಯೋಜನಾ ನಿಯಾಮಕ ಸಮಿತಿ ಸಭೆಯಲ್ಲಿ ಈ ಹೆಚ್ಚುವರಿ ಕಾಮಗಾರಿಗಳು ಅವಶ್ಯಕವೆಂದು ಪರಿಗಣಿಸಿ ನಿರ್ಣಯ ಕೈಗೊಂಡಿರುವುದರಿಂದ ತಿಳಿಸಿ ಹೆಚ್ಚುವರಿ ಪ್ರಮಾಣದಲ್ಲಿ ನಿರ್ವಹಿಸಿರುವ ಕಾಮಗಾರಿಗಳಿಗೆ ವರ್ಕ್‌ಸ್ಲಿಪ್‌ಗಳನ್ನು ತಯಾರಿಸಿದ್ದು, ಸದರಿ ವರ್ಕ್‌ಸ್ಲಿಪ್‌ಗಳ ಮೊತ್ತವು ರೂ. 32,79,154.00 ಲಕ್ಷಗಳಾಗಿದ್ದು, ಈ ಮೊತ್ತವನ್ನು ಮೂಲ ಅಂದಾಜು ಮೊತ್ತ ರೂ. 196.32 ಲಕ್ಷಗಳಿಗೆ ಹೋಲಿಸಿದಾಗ ಶೇ. 16.70 ರಷ್ಟಾಗಿದ್ದು, ಈ ಯೋಜನೆಯು ಸಂಪೂರ್ಣ ಫಲಪ್ರದ ಆಗಬೇಕಾದಲ್ಲಿ ಕೆಲವು ಹೆಚ್ಚುವರಿ ಕಾಮಗಾರಿಗಳು ಅನಿವಾರ್ಯವಾಗಿರುವುದರಿಂದ ಟೆಂಡರ್ BOQ ನಲ್ಲಿನ ಕೆಲವು ಐಟಂಗಳನ್ನು ಅವಶ್ಯಕತೆಗನುಗುಣವಾಗಿ ಅಂದರೆ Rechip Corpeting ಸಿ.ಸಿ. ಚರಂಡಿ, ಪರಿವೀಕ್ಷಣಾ ಕೋಣೆ ಮತ್ತು ಮುಚ್ಚಳಗಳು, Road embankment ಗಳಿಗಾಗಿ ರೂ. 23,02,374/– ಗಳಿಗೆ EIRL ತಯಾರಿಸಿದ್ದು, ಈ ಮೊತ್ತವನ್ನು ಟೆಂಡರ್ ಮೊತ್ತ ರೂ. 187,39,791/– ಗಳಿಗೆ ಹೋಲಿಸಿದಾಗ ಶೇ. 12,28 ರಷ್ಟಾಗಿರುತ್ತದೆ. ಲೋಕೋಪಯೋಗಿ ಸಂಹಿತೆ ಪ್ರಕಾರ ಮಂಜೂರಾತಿ ನೀಡುವ ಅಧಿಕಾರ ಮಂಡಳಿಯ ವ್ಯಾಪ್ತಿಯಲ್ಲಿ ಬರುತ್ತದೆ.

ಸದರಿ ಯೋಜನೆಯ ಕಾಮಗಾರಿಗಳು ಪೂರ್ಣಗೊಂಡಿದ್ದು, ಒಟ್ಟು ಅಂತಿಮ ಬಿಲ್ಲಿನ ಮೊತ್ತ ರೂ. 2,11,14,746.00 ಗಳಾಗಿರುತ್ತದೆ. ಈ ಯೋಜನೆಯಲ್ಲಿ ಕುಡಿಯುವ ನೀರಿನ ವ್ಯವಸ್ಥೆ ರೂ. 2,14,744.00 ನ್ನು ವಿದ್ಯುಚ್ಛಕ್ತಿ ಮಂಡಳಿಗಳಿಗೆ ಪಾವತಿಸಿರುವುದರಿಂದ ರೂ. 2,14,734.00 ಗಳು ಆರ್ಥಿಕ ಹೆಚ್ಚುವರಿ (Extra Financial Implication) ಆಗಿರುತ್ತದೆ.

ಆದ ಕಾರಣ ಈ ಕಾಮಗಾರಿಯ ರೂ. 32,79,154.00 ಗಳ ವರ್ಕ್‌ಸ್ಲಿಪ್ ಮತ್ತು ರೂ. 23,02,374.00 ಗಳ EIRLನ ಅನುಮೋದನೆಗಾಗಿ ಹಾಗೂ ಈ ಯೋಜನೆಯಲ್ಲಿ ಕುಡಿಯುವ ನೀರಿನ ವ್ಯವಸ್ಥೆಗಾಗಿ ವಿದ್ಯುಚ್ಛಕ್ತಿ ಮಂಡಳಿಗೆ ಪಾವತಿಸಿರುವ ರೂ. 2,14,734.00 ಆರ್ಥಿಕ ಹೆಚ್ಚುವರಿಯಾಗಿರುವ ಮೊತ್ತಕ್ಕೆ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 67 ಕೊಮಂಲೆ 2005, ಬೆಂಗಳೂರು, ದಿನಾಂಕ: 02ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಶಿವಮೊಗ್ಗ ನಗರದಲ್ಲಿ ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ರೂ. 196.32 ಲಕ್ಷಗಳ ಅಂದಾಜು ಪಟ್ಟಿಯ ಕಾಮಗಾರಿಗಳಿಗೆ ಮಂಜೂರಾತಿ ನೀಡಿದ್ದು, 2002–03 ಕಾಮಗಾರಿ ಬದಲಾವಣೆ ಹಾಗೂ ಹೆಚ್ಚುವರಿ ಪ್ರಮಾಣದಲ್ಲಿ ನಿರ್ವಹಿಸಿರುವ ಕಾಮಗಾರಿಗಳಿಗೆ ತಯಾರಿಸಿರುವ ವರ್ಕ್‌ಸ್ಲಿಪ್ ಮೊತ್ತ ರೂ. 32,79,154.00 ಮತ್ತು EIRL ಮೊತ್ತ ರೂ. 23,02,374.00 ಗಳಾಗಿದ್ದು, ಇದು ಮೂಲ ಅಂದಾಜು ಮೊತ್ತಕ್ಕಿಂತ ರೂ. 16.70 ಲಕ್ಷಗಳು ಹೆಚ್ಚಾಗಿದ್ದು, ಈ ಯೋಜನೆಯಲ್ಲಿ ಕುಡಿಯುವ ನೀರಿನ ವ್ಯವಸ್ಥೆಗಾಗಿ ವಿದ್ಯುಚ್ಛಕ್ತಿ ಮಂಡಳಿಗೆ ಪಾವತಿಸಿರುವ ರೂ. 2,14,734.00 ಗಳು ಆರ್ಥಿಕ ಹೆಚ್ಚುವರಿಯಾಗಿರುವ ಮೊತ್ತವನ್ನು ಯೋಜನಾ ಮೊತ್ತದ ಮಿತಿಯಲ್ಲಿ ಹಾಗೂ ದಿನಾಂಕ 13.05.2003 ರ ಆದೇಶದಲ್ಲಿ ವಿಧಿಸಿರುವ ಷರತ್ತುಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಷರತ್ತಿಗೆ ಒಳಪಟ್ಟು ಸರ್ಕಾರದ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 249

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ.

**ವಿಷಯ:** ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ಕೆ.ಜಿ.ಎಫ್. ನಗರದ ಕೊಳಚೆ ಪ್ರದೇಶಗಳ ಉನ್ನತೀಕರಣ ಮತ್ತು ಅಭಿವೃದ್ಧಿಪಡಿಸುವ ಕಾಮಗಾರಿ ಕುರಿತು–ಮಂಡಳಿ ಅಧಿಕಾರ ವ್ಯಾಪ್ತಿ ಮೀರಿರುವ ವರ್ಕ್‌ಸ್ಲಿಪ್‌ಗೆ ಮಂಜೂರಾತಿ ನೀಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ವಇ 34 ಕೊಮಂಲೆ 2002(1) ದಿನಾಂಕ: 13.05.2003 ಮತ್ತು 22.05.2003.

2) ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪತ್ರ ಸಂಖ್ಯೆ: ಕಕೊನಿಮ / ಆಯುಕ್ತರು / ನಿಜ್ಯೋ / ಕೆ.ಜಿ.ಎಫ್. / 1–ಹಂತ / 2005–06 / 1061, ದಿನಾಂಕ: 18.11.2005.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೆ.ಜಿ.ಎಫ್. ನಗರದ ವ್ಯಾಪ್ತಿಯಲ್ಲಿ ಬರುವ ಕೊಳಚೆ ಪ್ರದೇಶಗಳಲ್ಲಿನ ಕೊಳಚೆ ನಿವಾಸಿಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ 214.10 ಲಕ್ಷಗಳ ಅಂದಾಜು ಪಟ್ಟಿಯಂತೆ ಕಾಮಗಾರಿಗಳನ್ನು ನಿರ್ವಹಿಸಲು ಅನುಮೋದಿಸಿದ್ದು, ಇದರಲ್ಲಿ ರೂ. 2,40,80,836/– ಗಳಿಗೆ ಟೆಂಡರ್ ಕರೆಯಲಾಗಿದೆ. ಟೆಂಡರ್‌ನಲ್ಲಿ ಅತಿ ಕಡಿಮೆ ದರ ಅಂದರೆ ಟೆಂಡರ್ ಕರೆಯಲಾದ ಮೊತ್ತಕ್ಕಿಂತ ಶೇ. 14 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಗಳ ಅಂದಾಜು ಪಟ್ಟಿಗೆ ಟೆಂಡರ್ ನಿಯಮದಂತೆ ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಅನುಮೋದನೆ ಹಾಗೂ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯ ಟೆಂಡರ್ ಅಧಿಸೂಚನೆ ದಿನಾಂಕ: 13.12.2002 ರಲ್ಲಿನ ಟೆಂಡರ್ ಷೆಡ್ಯೂಲ್‌ಗಳಂತೆ ಕಾಮಗಾರಿಗಳನ್ನು ನಿರ್ವಹಿಸಲು ಗುತ್ತಿಗೆದಾರರಾದ ಮೆ: ಬಾಲಾಜಿ ಅಂಡ್ ಕಂಪನಿ, ಬೆಂಗಳೂರು ಇವರಿಗೆ ನೀಡಲು ಸರ್ಕಾರ ಮಂಜೂರು ನೀಡಿದೆ.

ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪ್ರಸ್ತಾವನೆಯಲ್ಲಿ ದಿನಾಂಕ: 30.11.2004 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯಮಟ್ಟದ ಯೋಜನಾ ನಿಯಾಮಕ ಸಮಿತಿ ಸಭೆಯಲ್ಲಿ ಚರ್ಚಿಸಿ, ಮೊದಲ ಹಂತದಲ್ಲಿ ಗುತ್ತಿಗೆದಾರರು ನಿರ್ವಹಿಸಿರುವ ಕಾಮಗಾರಿಗಳ ಪರಿವೀಕ್ಷಣೆ ಮಾಡಿ ವರದಿ ಸಲ್ಲಿಸಲು ಕಾಮಗಾರಿಗಳಲ್ಲಿ ಮೂಲ ಮಂಜೂರಾತಿಯಲ್ಲಿ ಬದಲಾವಣೆಯಾಗಿದ್ದಲ್ಲಿ ಬದಲಾವಣೆಯಾದ ಕಾಮಗಾರಿಗಳ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಮಂಜೂರಾತಿ ಪಡೆಯಲು ತಿಳಿಸಲಾಗಿದೆ. ಅದರಂತೆ ಮಂಡಳಿಯ ತಾಂತ್ರಿಕ ನಿರ್ದೇಶಕರು, ಕೆ.ಜಿ.ಎಫ್. ನಗರದ 6 ಕೊಳಚೆ ಪ್ರದೇಶಗಳಲ್ಲಿ ಕಾಮಗಾರಿಗಳು ಮುಕ್ತಾಯ ಹಂತದಲ್ಲಿದ್ದು ಶೇಕಡಾ 75% ಭಾಗ ಕಾಮಗಾರಿಗಳು ಮುಗಿದಿರುವುದಾಗಿ ಸಂಬಂಧಪಟ್ಟ ಸ.ಕಾ.ಅ. ರವರು ಸಭೆಗೆ ತಿಳಿಸಿದರು. ಮೇಲಿನ ಕೊಳಚೆ ಪ್ರದೇಶಗಳಲ್ಲಿ ವಾಸ್ತವ ಸ್ಥಿತಿಗಳಿಗೆ

ಅನುಗುಣವಾಗಿ ಹಾಗೂ ಸ್ಥಳೀಯ ಪ್ರತಿನಿಧಿಗಳು ಮತ್ತು ಕೊಳಚೆ ನಿವಾಸಿಗಳ ಬೇಡಿಕೆಗಳಿಗೆ ಅನುಗುಣವಾಗಿ ಹೆಚ್ಚುವರಿಯಾಗಿ ಕಾಂಕ್ರೀಟ್ ಪೇವಿಂಗ್, ಕಲ್ಲು ಕಟ್ಟಡ ಚರಂಡಿ, ಒಳಚರಂಡಿ, ಡಾಂಬರೀಕರಣ, ತಂತಿಬೇಲಿ ನಿರ್ಮಾಣ ಹಾಗೂ ಹೊರ ವಿದ್ಯುದ್ದೀಕರಣ ಹೆಚ್ಚುವರಿ ಕಾಮಗಾರಿಗಳು ಕೊಳಚೆ ಪ್ರದೇಶಗಳಿಗೆ ಅಗತ್ಯ ಹಾಗೂ ಕನಿಷ್ಠ ಮೂಲಭೂತ ಸೌಕರ್ಯಗಳನ್ನು ಅಗತ್ಯವಾಗಿ ನಿರ್ವಹಿಸಬೇಕಾಗಿರುವುದರಿಂದ ಈ ಕಾಮಗಾರಿಗಳ ಅವಶ್ಯಕತೆ ಆಧರಿಸಿ ಜಿಲ್ಲಾ ಮಟ್ಟದ ಯೋಜನಾ ನಿಯಾಮಕ ಸಮಿತಿ ಸಭೆಯಲ್ಲಿ ಈ ಹೆಚ್ಚುವರಿ ಕಾಮಗಾರಿಗಳು ಅವಶ್ಯಕವೆಂದು ಪರಿಗಣಿಸಿ ನಿರ್ಣಯ ಕೈಗೊಂಡಿರುವುದರಿಂದ ಕಾಮಗಾರಿಗಳನ್ನು ಕೈಗೊಂಡಿರುವುದಾಗಿ ತಿಳಿಸಿ, ಹೆಚ್ಚುವರಿ ಪ್ರಮಾಣದಲ್ಲಿ ನಿರ್ವಹಿಸಿರುವ ಕಾಮಗಾರಿಗಳಿಗೆ ವರ್ಕ್‌ಸ್ಲಿಪ್‌ಗಳನ್ನು ತಯಾರಿಸಿದ್ದು, ಸದರಿ ವರ್ಕ್‌ಸ್ಲಿಪ್‌ಗಳ ಮೊತ್ತವು ರೂ. 53,47,476.00 ಲಕ್ಷಗಳಾಗಿದ್ದು, ಈ ಮೊತ್ತವನ್ನು ಮೂಲ ಅಂದಾಜು ಮೊತ್ತ ರೂ. 214.10 ಲಕ್ಷಗಳಿಗೆ ಹೋಲಿಸಿದಾಗ ಶೇ. 24.97 ರಷ್ಟಾಗಿದ್ದು, ಈ ಯೋಜನೆಯು ಸಂಪೂರ್ಣ ಫಲಪ್ರದ ಆಗಬೇಕಾದಲ್ಲಿ, ಕೆಲವು ಹೆಚ್ಚುವರಿ ಕಾಮಗಾರಿಗಳು ಅನಿವಾರ್ಯವಾಗಿರುವುದರಿಂದ ಹಾಗೂ ಇದು ಮಂಡಳಿಯ ಅಧಿಕಾರ ವ್ಯಾಪ್ತಿ ಮೀರಿರುತ್ತದೆ. ಪ್ರಸ್ತುತ ಕಾಮಗಾರಿಗಳು ಬಹುತೇಕ ಪೂರ್ಣಗೊಂಡಿದ್ದು, ಒಟ್ಟು ಯೋಜನಾ ಮೊತ್ತ ರೂ. 240.81 ಲಕ್ಷಗಳಾಗುವ ಸಂಭವವಿದ್ದು, ಸದರಿ ಯೋಜನೆಯ ಕಾಮಗಾರಿಗಳಲ್ಲಿ ರೂ. 75,68,383.00 ಲಕ್ಷ ಉಳಿತಾಯವಿದ್ದು, ವರ್ಕ್‌ಸ್ಲಿಪ್‌ನ ಹೆಚ್ಚುವರಿ ರೂ. 53,47,476.00 ಸದರಿ ಉಳಿತಾಯದ ಮೊತ್ತದಿಂದ ಭರಿಸಬಹುದಾಗಿದ್ದು, ಅನುಮೋದಿತ ಅಂದಾಜಿನ ಟೆಂಡರ್ ಮೊತ್ತ ರೂ. 2,40,80,836/– ಲಕ್ಷಗಳ ಮಿತಿಯಲ್ಲೇ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗುವುದೆಂದು ಹಾಗೂ ಇದರಿಂದ ಆರ್ಥಿಕ ಹೊರೆ ಉಂಟಾಗದ ಕಾರಣ ಈ ಹೆಚ್ಚುವರಿ ಮೊತ್ತ ರೂ. 53,47,476.00 ಲಕ್ಷಗಳಿಗೆ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 69 ಕೊಮಂಲೆ 2005, ಬೆಂಗಳೂರು, ದಿನಾಂಕ: 02ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಕೆ.ಜಿ.ಎಫ್. ನಗರದಲ್ಲಿ ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ರೂ. 214.10 ಲಕ್ಷಗಳ ಅಂದಾಜು ಪಟ್ಟಿಯ ಕಾಮಗಾರಿಗಳಿಗೆ ಮಂಜೂರಾತಿ ನೀಡಿದ್ದು, ಕಾಮಗಾರಿಗಳನ್ನು ಹೆಚ್ಚುವರಿ ಪ್ರಮಾಣದಲ್ಲಿ ನಿರ್ವಹಿಸಿದ್ದು, ಹೆಚ್ಚುವರಿ ಕಾಮಗಾರಿಗಳ ವರ್ಕ್‌ಸ್ಲಿಪ್ ಮೊತ್ತ ರೂ. 53,47,476.00 ಲಕ್ಷಗಳಾಗಿದ್ದು, ಇದು ಮೂಲ ಅಂದಾಜು ಮೊತ್ತ ರೂ. 214.10 ಲಕ್ಷಗಳಿಗೆ ಹೋಲಿಸಿದ್ದು, ಶೇ. 24.97 ರಷ್ಟು ಹೆಚ್ಚಾಗಿದ್ದು. ಈ ಯೋಜನೆಯು ಸಂಪೂರ್ಣ ಫಲಪ್ರದವಾಗಬೇಕಾಗಿರುವುದರಿಂದ, ಸದರಿ ಯೋಜನೆಯ ಕಾಮಗಾರಿಗಳಲ್ಲಿ ರೂ. 75,68,383.00 ಲಕ್ಷ ಉಳಿತಾಯವಿದ್ದು, ಇದರಿಂದ ಯಾವುದೇ ರೀತಿಯ ಆರ್ಥಿಕ ಹೊರೆ ಉಂಟಾಗದ ಕಾರಣ ಮತ್ತು ಅನುಮೋದಿತ ಅಂದಾಜಿನ ಟೆಂಡರಿನ ಮೊತ್ತ ರೂ. 2,40,80,836.00 ಲಕ್ಷಗಳ ಮಿತಿಯಲ್ಲೇ ಕಾಮಗಾರಿಗಳನ್ನು ಪೂರ್ಣಗೊಳಿಸಲಿದ್ದು, ಒಟ್ಟಾರೆ ಮೊತ್ತ ರೂ. 240.81 ಲಕ್ಷಗಳಾಗುವ ಸಂಭವವಿದ್ದು, ದಿನಾಂಕ: 13.5.2003 ರ ಆದೇಶದಲ್ಲಿ ವಿಧಿಸಿರುವ ಷರತ್ತುಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಷರತ್ತಿಗೆ ಒಳಪಟ್ಟು ಹೆಚ್ಚುವರಿ ಕಾಮಗಾರಿ ಮೊತ್ತ ರೂ. 53,47,476.00 ಲಕ್ಷಗಳ ವರ್ಕ್‌ಸ್ಲಿಪ್‌ಗೆ ಸರ್ಕಾರ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 250

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ.

**ವಿಷಯ:** 2005–2006ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಪ್ರಸ್ತಾಪಿತ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಕೊನಿಮ / ಆಯುಕ್ತರು / ಟಿ.ಡಿ. / ಸೆಸ್ / 2005–06 / 932, ದಿನಾಂಕ: 19.1.2005.

2) ಆಯುಕ್ತರು, ಕಕೊನಿ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಕೊನಿಮ / ಆಯುಕ್ತರು / ಕ್ರಿಯೋ / 2005–06 / 1127, ದಿನಾಂಕ: 25.11.2005.

**ಪ್ರಸ್ತಾವನೆ :**

ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು 2005–06ನೇ ಸಾಲಿನ ವಸತಿ ಕ್ರಿಯಾ ಯೋಜನೆಯಡಿ ಬೆಂಗಳೂರು ನಗರ ಹಾಗೂ ಕೋಲಾರ ಜಿಲ್ಲೆಯ ಮುಳಬಾಗಿಲು ಹಾಗೂ ಶ್ರೀನಿವಾಸ ಪುರದಲ್ಲಿ ಕಾಮಗಾರಿಗಳನ್ನು ಕೈಗೊಳ್ಳಲು ಒಟ್ಟು ಅಂದಾಜು ಮೊತ್ತ ರೂ. 121.75 ಲಕ್ಷಗಳಾಗಿರುತ್ತದೆ. ಈ ಕಾಮಗಾರಿಗಳನ್ನು ಕೈಗೊಳ್ಳಲು ಮಂಡಳಿಯಲ್ಲಿ ಲಭ್ಯವಿರುವ ಬಿ.ಡಿ.ಎ. ಸೆಸ್ ಮೊತ್ತದಡಿಯಲ್ಲಿ ಭರಿಸುವುದಾಗಿ ಹಾಗೂ ಸದರಿ ಕಾಮಗಾರಿಗಳಿಗಾಗಿ ಸರ್ಕಾರದಿಂದ ಕ್ರಿಯಾ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಗೆ ದಿನಾಂಕ: 7.10.2005 ರಂದು ಮಂಡಳಿ ಸಭೆಯಲ್ಲಿ ಅನುಮೋದನೆ ಪಡೆದಿರುವುದಾಗಿ ತಿಳಿಸಿರುತ್ತಾರೆ.

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 58 ಕೊಮಂಲೆ 2005, ಬೆಂಗಳೂರು, ದಿನಾಂಕ: 21ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು 2005–06ನೇ ಸಾಲಿನ ವಸತಿ ಕ್ರಿಯಾ ಯೋಜನೆಯಡಿ ಬೆಂಗಳೂರು ನಗರ ಹಾಗೂ ಕೋಲಾರ ಜಿಲ್ಲೆಯ ಮುಳಬಾಗಿಲು ಮತ್ತು ಶ್ರೀನಿವಾಸಪುರ ಇವುಗಳ ಕಾಮಗಾರಿಗಳ ವಿವರ ಕೆಳಕಂಡಂತಿದೆ.

| ಕ್ರ.ಸ. | ಕೊಳಚೆ ಪ್ರದೇಶಗಳ ಹೆಸರು | ಕಾಮಗಾರಿಗಳ ವಿವರ | ಅಂದಾಜು ಮೊತ್ತ (ಲಕ್ಷ ರೂ.ಗಳಲ್ಲಿ) |
|---|---|---|---|
| 1. | ಸಾದರಮಂಗಲ, ಬೆಂಗಳೂರು | ರಸ್ತೆ, ಚರಂಡಿ, ನೀರು ಸರಬರಾಜು | 16.50 |
| 2. | ಸಾದರಮಂಗಲ, ಬೆಂಗಳೂರು | ಒಳ ಮತ್ತು ಹೊರ ನೈರ್ಮಲೀಕರಣ ಮತ್ತು ಅಭಿವೃದ್ಧಿ | 14.50 |
| 3. | ಗಜೇಂದ್ರನಗರ, ಬೆಂಗಳೂರು | ರಸ್ತೆ, ಚರಂಡಿ, ಹೊರ ನೈರ್ಮಲೀಕರಣ | 19.50 |
| 4. | ಡಾ: ಅಂಬೇಡ್ಕರ್ ನಗರ, ರಾಮಮೂರ್ತಿ ನಗರ, ಬೆಂಗಳೂರು | ಸಿ.ಸಿ.ರಸ್ತೆ, ಚರಂಡಿ, ನೀರು ಸರಬರಾಜು | 13.00 |

| 1 | 2 | 3 | 4 |
|---|---|---|---|
| 5. | ಎ.ಡಿ. ಕಾಲೋನಿ, ಮುಳಬಾಗಿಲು | ರಸ್ತೆ, ಚರಂಡಿ | 7.5 |
| 6. | ಆಶ್ರಯ ಬಡಾವಣೆ, : ಶ್ರೀನಿವಾಸಪುರ | ರಸ್ತೆ, ಚರಂಡಿ | 7.25 |
| 7. | ಲಗ್ಗೆರೆ ಸರ್ವೆ ನಂ. 9:1, ಬೆಂಗಳೂರು | ವಾಣಿಜ್ಯ ಸಂಕೀರ್ಣದ ಉಳಿಕೆ ಕಾಮಗಾರಿ | 10.50 |
| 8. | ಲಗ್ಗೆರೆ ಸರ್ವೆ ನಂ. 9:1, ಸಂಜಯಗಾಂಧೀನಗರ, ಬೆಂಗಳೂರು. | ಮಸೀದಿ ಪಕ್ಕದಲ್ಲಿ ವಾಣಿಜ್ಯ ಸಂಕೀರ್ಣ ನಿರ್ಮಾಣ | 14.00 |
| 9. | ಲಗ್ಗೆರೆ ಸರ್ವೆ ನಂ. 8:1, ಕಾವೇರಿ ನಗರ, ಬೆಂಗಳೂರು | ವಾಣಿಜ್ಯ ಸಂಕೀರ್ಣ ಹಾಗೂ ಸಮುದಾಯ ಭವನ ನಿರ್ಮಾಣ | 19.00 |
| | | **ಒಟ್ಟು ಮೊತ್ತ ರೂ.** | **121.75** |

ಸದರಿ ಕಾಮಗಾರಿಗಳ ಒಟ್ಟು ವೆಚ್ಚ ರೂ. 121.75 ಲಕ್ಷಗಳನ್ನು ಮಂಡಳಿಯ ಬಿ.ಡಿ.ಎ. ಸೆಸ್ ಮೊತ್ತದಡಿಯಲ್ಲಿ ಭರಿಸಲು ಕ್ರಿಯಾ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 251

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ.

**ವಿಷಯ:** ನಿರ್ಮಲ ಜ್ಯೋತಿ 2ನೇ ಹಂತ 18 ಪ್ರಥಮ ದರ್ಜೆ ನಗರಗಳ ಕೊಳಚೆ ಪ್ರದೇಶದ ಉನ್ನತೀಕರಣ ಮತ್ತು ಅಭಿವೃದ್ಧಿಪಡಿಸುವ ಕಾಮಗಾರಿಗಳ ಅಂದಾಜು ಪಟ್ಟಿಗೆ ಅನುಮೋದನೆ ಹಾಗೂ ಅಲ್ಪಾವಧಿ ಟೆಂಡರ್ ಪ್ರಕಟಣೆ ಕೈಗೊಳ್ಳಲು ಅನುಮೋದನೆ ಕುರಿತಂತೆ.

**ಓದಲಾಗಿದೆ:** 1) ಆಯುಕ್ತರು, ಕಕೊನಿಮಂರವರ ಪತ್ರ ಸಂಖ್ಯೆ: ಕಕೊನಿಮ / ನಿಜ್ಯೋ / 18 ಪ್ರದನಗ / 2005–06 / 1044, ದಿನಾಂಕ: 15.11.2005.

2) ಆಯುಕ್ತರು, ಕಕೊನಿಮಂರವರ ಪತ್ರ ಸಂಖ್ಯೆ: ಕಕೊನಿಮ / ಆಯುಕ್ತರು / 2005–06 / 1270, ದಿನಾಂಕ: 22.12.2005.

**ಪ್ರಸ್ತಾವನೆ :**

ನಿರ್ಮಲ ಜ್ಯೋತಿ ಯೋಜನೆ 2ನೇ ಹಂತದ 18 ಪ್ರಥಮ ದರ್ಜೆ ನಗರಗಳ ಕೊಳಚೆ ಪ್ರದೇಶಗಳ ಉನ್ನತೀಕರಣ ಮತ್ತು ಅಭಿವೃದ್ಧಿಪಡಿಸುವ ಕಾಮಗಾರಿಯನ್ನು ಅನುಷ್ಠಾನಗೊಳಿಸುವ ಬಗ್ಗೆ ರಾಜ್ಯ ಮಟ್ಟದ ಯೋಜನಾ ನಿಯಾಮಕ ಸಮಿತಿ ಸಭೆಯ ನಡವಳಿ ದಿನಾಂಕ 27.1.2004 ಮತ್ತು 20.08.2004 ರಲ್ಲಿ ಈ ಯೋಜನೆಗೆ ಅನುದಾನ ಒದಗಿಸುವ ಬಗ್ಗೆ ರೂ. 66.94 ಕೋಟಿಗಳಿಗೆ ಅನುಮೋದನೆ ದೊರೆತಿರುತ್ತದೆ. ಆದರೆ ಕಡತ ಸಂಖ್ಯೆ: ವಇ 8 ಕೊಮಂಲೆ 2004 ದಿನಾಂಕ 16.7.2004 ರಲ್ಲಿ ಸದರಿ ಯೋಜನೆಗೆ 2004–05ನೇ ಸಾಲಿನ ಆಯವ್ಯಯದಲ್ಲಿ ಅನುದಾನವನ್ನು ಒದಗಿಸಲಾಗಿದ್ದರೆ, ಸದರಿ ಕಾಮಗಾರಿಯ ಟೆಂಡರ್ ಪ್ರಕ್ರಿಯೆಯ ಪ್ರಕಟಣೆಯನ್ನು ಕೈಗೊಳ್ಳಲು ಸರ್ಕಾರವು ಅನುಮೋದನೆಯನ್ನು ನೀಡಿತ್ತು.

2004–05ನೇ ಸಾಲಿನ ಆಯವ್ಯಯದಲ್ಲಿ ಅನುದಾನ ಒದಗಿಸದ ಕಾರಣ ಉಲ್ಲೇಖ (1) ಮತ್ತು (2) ರಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಪ್ರಸಕ್ತ ಸಾಲಿನ ದರಪಟ್ಟಿಯಂತೆ ರೂ. 3.96 ಕೋಟಿಗಳನ್ನು ಹೆಚ್ಚುವರಿಯಾಗುತ್ತಿದ್ದು, ಒಟ್ಟಾರೆ ಪರಿಷ್ಕೃತ ಅಂದಾಜಿನ ಮೊತ್ತ ರೂ. 70.91 ಕೋಟಿಗಳಿಗೆ ಆಡಳಿತಾತ್ಮಕ ಮಂಜೂರಾತಿ ಹಾಗೂ ಅಲ್ಪಾವಧಿ ಟೆಂಡರ್ ಕರೆಯುವ ಬಗ್ಗೆ ಶೀಘ್ರವಾಗಿ ಅನುಮೋದನೆ ನೀಡುವ ಸಲುವಾಗಿ ಸಚಿವ ಸಂಪುಟದ ಅನುಮೋದನೆ ಪಡೆಯುವಂತೆ ಕೋರಿರುತ್ತಾರೆ.

ನಿರ್ಮಲ ಜ್ಯೋತಿ ಯೋಜನೆಯು ಮಾರ್ಚ್ 2006 ರೊಳಗಾಗಿ ಮುಕ್ತಾಯಗೊಳ್ಳಲಿರುವ ಹಿನ್ನೆಲೆಯಲ್ಲಿ 2ನೇ ಹಂತದ 18 ಪ್ರಥಮ ದರ್ಜೆ ನಗರಗಳ ಯೋಜನೆಯ ಕಾಮಗಾರಿಗಳನ್ನು ತುರ್ತಾಗಿ ಕೈಗೊಳ್ಳುವ ಸಲುವಾಗಿ ಸಚಿವ ಸಂಪುಟದ ಅನುಮೋದನೆಗಾಗಿ ಸಲ್ಲಿಸಲಾಗಿತ್ತು.

ಸಚಿವ ಸಂಪುಟವು ಈ ಯೋಜನೆಯ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಿದ್ಧಪಡಿಸಿರುವ ರೂ. 70.91 ಕೋಟಿ ಅಂದಾಜನ್ನು, ನಿರ್ಮಲ ಜ್ಯೋತಿ ಯೋಜನೆಯಡಿಯಲ್ಲಿ ಬರದೇ ಇರುವ ಇತರ ನಗರ / ಪಟ್ಟಣ / ಪ್ರದೇಶಗಳ ಅಭಿವೃದ್ಧಿ ಕಾಮಗಾರಿಗಳಿಗಾಗಿ ರೂ. 20 ಕೋಟಿ ಯೋಜನೆಗೆ ಹಾಗೂ ನಿರ್ಮಲ ಜ್ಯೋತಿ ಯೋಜನೆಯ ಪರಿಷ್ಕೃತ 3ನೇ ಹಂತ ಮತ್ತು 4ನೇ ಹಂತದ ಕೊಳಚೆ ಪ್ರದೇಶಗಳ ಅಭಿವೃದ್ಧಿ ಕಾಮಗಾರಿಗಳನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಕೈಗೊಳ್ಳಲು ಸಚಿವ ಸಂಪುಟ ವಿಷಯ ಅನುಮೋದನೆ ನೀಡಿರುತ್ತದೆ. ಆರ್ಥಿಕ ಇಲಾಖೆಯು ಒಟ್ಟು ಯೋಜನಾ ಮೊತ್ತದ 90 ಕೋಟಿ ರೂ. ಗಳ ಪೈಕಿ ರೂ. 34.50 ಕೋಟಿಯನ್ನು ಪೂರಕ ಆಯವ್ಯಯವಾಗಿ 2005–06ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವುದರಿಂದ ಒಟ್ಟು 90 ಕೋಟಿ ರೂ.ಗಳ ಅಂದಾಜಿನ ಯೋಜನೆಗೆ ಸಚಿವ ಸಂಪುಟ ವಿಷಯ ಸಂಖ್ಯೆ: ಸಿ/09/2006 ದಿನಾಂಕ 10.1.2006 ರಲ್ಲಿ ಈ ಕೆಳಕಂಡಂತೆ ಸಹಮತಿ ನೀಡಿರುತ್ತದೆ.

(i) ಕರ್ನಾಟಕ ರಾಜ್ಯದ 18 ಪ್ರಥಮ ದರ್ಜೆ ನಗರಗಳ ಕೊಳಚೆ ಪ್ರದೇಶಗಳ ಉನ್ನತೀಕರಣ ಹಾಗೂ ಅಭಿವೃದ್ಧಿ ಕಾಮಗಾರಿಗಳನ್ನು ಪರಿಷ್ಕೃತ ಅಂದಾಜು ಮೊತ್ತ ರೂ. 70.91 ಕೋಟಿ ವೆಚ್ಚದಲ್ಲಿ ಟೆಂಡರ್ ಪ್ರಕ್ರಿಯೆಯನ್ನು ನಿಯಮಾನುಸಾರ ಕೈಗೊಳ್ಳಲು ಹಾಗೂ

(ii) ನಿರ್ಮಲ ಜ್ಯೋತಿ ಯೋಜನೆಯ ವ್ಯಾಪ್ತಿಯಲ್ಲಿ ಬರದ ಇನ್ನಿತರೆ ಪಟ್ಟಣ / ನಗರಗಳ ಕೊಳಚೆ ಪ್ರದೇಶಗಳ ಅಭಿವೃದ್ಧಿಗೆ ರೂ. 20 ಕೋಟಿ ವೆಚ್ಚದಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ನಿಯಮಾನುಸಾರ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಕೈಗೊಳ್ಳಲು

(iii) ನಿರ್ಮಲ ಜ್ಯೋತಿ ಯೋಜನೆಯ ಪರಿಷ್ಕೃತ 3ನೇ ಹಂತ ಮತ್ತು 4ನೇ ಹಂತದ ಕೊಳಚೆ ಪ್ರದೇಶಗಳ ಅಭಿವೃದ್ಧಿ ಕಾಮಗಾರಿಗಳನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಕೈಗೊಳ್ಳಲು

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 23 ಕೊಮಂಲೆ 2004, ಬೆಂಗಳೂರು, ದಿನಾಂಕ: 03ನೇ ಫೆಬ್ರವರಿ 2006**

ಮೇಲ್ಕಂಡ ಸಂದರ್ಭದಲ್ಲಿ ಸರ್ಕಾರವು 18 ಪ್ರಥಮ ದರ್ಜೆ ನಗರಗಳಲ್ಲಿ (ಬೆಳಗಾಂ, ಬಿಜಾಪುರ, ಹುಬ್ಬಳ್ಳಿ–ಧಾರವಾಡ, ಗದಗ, ಗುಲ್ಬರ್ಗ, ಬೀದರ್, ಬಳ್ಳಾರಿ, ರಾಯಚೂರು, ಹೊಸಪೇಟೆ, ತುಮಕೂರು, ಚಿತ್ರದುರ್ಗ, ಶಿವಮೊಗ್ಗ, ಭದ್ರಾವತಿ, ದಾವಣಗೆರೆ, ಮೈಸೂರು, ಹಾಸನ, ಕೋಲಾರ, ಕೆ.ಜಿ.ಎಫ್.) ಕೊಳಚೆ ಪ್ರದೇಶದ ಉನ್ನತೀಕರಣ ಮತ್ತು ಅಭಿವೃದ್ಧಿಪಡಿಸುವ ಕಾಮಗಾರಿಗಳ ಅಂದಾಜು ಪಟ್ಟಿಗೆ ನಿರ್ಮಲ ಜ್ಯೋತಿ 2ನೇ ಹಂತದ ಯೋಜನೆಗೆ ಪೂರಕ ಆಯವ್ಯಯವಾಗಿ 2005–06ನೇ ಸಾಲಿನ ಆಯವ್ಯಯದಲ್ಲಿ ಒಟ್ಟು 90 ಕೋಟಿ ರೂ.ಗಳ ಅಂದಾಜಿನ ಪೈಕಿ, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿರವರು ರೂ. 70.91 ಕೋಟಿಗಳಲ್ಲಿ ನಿರ್ಮಲ ಜ್ಯೋತಿ 2ನೇ ಹಂತದ ಟೆಂಡರ್ ಪ್ರಕ್ರಿಯೆಯನ್ನು ಕೈಗೊಳ್ಳಲು, ನಿರ್ಮಲ ಜ್ಯೋತಿ ಯೋಜನೆಯ ವ್ಯಾಪ್ತಿಯಲ್ಲಿ ಬರದ ಇನ್ನಿತರೆ ಪಟ್ಟಣ / ನಗರಗಳ ಕೊಳಚೆ ಪ್ರದೇಶಗಳ ಅಭಿವೃದ್ಧಿಗೆ ರೂ. 20 ಕೋಟಿ ವೆಚ್ಚದಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ನಿಯಮಾನುಸಾರ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಕೈಗೊಳ್ಳಲು ಹಾಗೂ ನಿರ್ಮಲ ಜ್ಯೋತಿ ಯೋಜನೆಯ ಪರಿಷ್ಕೃತ 3ನೇ ಹಂತ ಮತ್ತು 4ನೇ ಹಂತದ ಕೊಳಚೆ ಪ್ರದೇಶಗಳ ಅಭಿವೃದ್ಧಿ ಕಾಮಗಾರಿಗಳನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಕೈಗೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸಚಿವ ಸಂಪುಟ ಟಿಪ್ಪಣಿ ಸಂಖ್ಯೆ: ಸಿ/09/2006 ದಿನಾಂಕ 10.1.2006 ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 264

**ಜೆ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ.

**ಕಾರ್ಮಿಕ ಸಚಿವಾಲಯ**

**ವಿಷಯ:** ದಿನಾಂಕ1/4/2000ರಂದು ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗದಲ್ಲಿ ಖಾಲಿ ಇರುವ ಹುದ್ದೆಗಳ ಪೈಕಿ ಶೇ.80ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:**
1) ರಾಜ್ಯ ಆಡಳಿತ ಸುಧಾರಣಾ ಆಯೋಗದ ಡಿಸೆಂಬರ್ 2002ರ ವರದಿ.
2) ಸರ್ಕಾರಿ ಆದೇಶ ಸಂಖ್ಯೆ:ಕಾಇ 10 ಇಟಿಎಂ 2002 ದಿ:19/8/2004.
3) ದಿ:8/6/2005ರಂದು ನಡೆದ ಅಧಿಕಾರಯುತ ಸಮಿತಿ ಸಭೆಯ ನಡವಳಿಗಳು.
4) ದಿ:25/10/2005ರ ಆದೇಶ ಸಂಖ್ಯೆ ಕಾಇ 10 ಇಟಿಎಂ 2002.
5) ದಿ:17/9/2005ರ ನಿರ್ದೇಶಕರ ಪತ್ರ ಸಂಖ್ಯೆ: ಉ.ತ.ಇ. / ತರಬೇತಿ / ಆಡಳಿತ–04ಎ/ ವಿನೋ–/05–06.

**ಪ್ರಸ್ತಾವನೆ :**

ರಾಜ್ಯ ಆಡಳಿತ ಸುಧಾರಣಾ ಆಯೋಗ ಡಿಸೆಂಬರ್ 2002ದಲ್ಲಿ ಸಲ್ಲಿಸಿದ ವರದಿಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ತರಬೇತಿ ವಿಭಾಗಕ್ಕೆ ಸಂಬಂಧಪಟ್ಟಂತೆ ಕೆಲವೊಂದು ಶಿಫಾರಸ್ಸು ಮಾಡಿರುತ್ತಾರೆ. 13.27ರಿಂದ 13.33ರವರೆಗಿನ ಶಿಫಾರಸ್ಸುಗಳಲ್ಲಿ ತರಬೇತಿ ವಿಭಾಗಕ್ಕೆ ಸಂಬಂಧಪಟ್ಟಂತೆ ಇತರೆ ಶಿಫಾರಸ್ಸುಗಳೊಂದಿಗೆ ಇಲಾಖೆಯ ಸಿಬ್ಬಂದಿಯನ್ನು ಕಡಿತಗೊಳಿಸುವ ಬಗ್ಗೆ ಶಿಫಾರಸ್ಸು ಮಾಡಿರುತ್ತಾರೆ.

ಅಪರ ಕಾರ್ಯದರ್ಶಿ ಅವರ ನೇತೃತ್ವದ ಅಧಿಕಾರಿ ಸಮಿತಿಯು, ಆಡಳಿತ ಸುಧಾರಣಾ ಆಯೋಗವು, ತರಬೇತಿ ವಿಭಾಗಕ್ಕೆ ಸಂಬಂಧಪಟ್ಟಂತೆ ಮಾಡಿದ ಶಿಫಾರಸ್ಸನ್ನು ಸವಿಸ್ತಾರವಾಗಿ ಚರ್ಚಿಸಿ ದಿನಾಂಕ 30/10/2002ರಂದು ನಡೆದ ಸಭೆಯಲ್ಲಿ ಈ ಕೆಳಕಂಡ 131 ಹುದ್ದೆಗಳನ್ನು ರದ್ದುಪಡಿಸಲು ತೀರ್ಮಾನಿಸಲಾಗಿತ್ತು. ಅದರಂತೆ ಮೇಲೆ ಓದಲಾದ (2)ರ ಆದೇಶದಲ್ಲಿ ಸೂಕ್ತ ಆದೇಶ ಹೊರಡಿಸಲಾಗಿದೆ.

ದಿನಾಂಕ 8/6/2005ರಂದು ನಡೆದ ಅಧಿಕಾರಯುತ ಸಮಿತಿ ಸಭೆಯಲ್ಲಿ ತರಬೇತಿ ವಿಭಾಗಕ್ಕೆ ಸಂಬಂಧಪಟ್ಟಂತೆ 133 ಗ್ರೂಪ್–ಡಿ ಹುದ್ದೆಗಳನ್ನು ರದ್ದುಗೊಳಿಸಲು ತೀರ್ಮಾನಿಸಲಾಗಿದೆ. ಅದರಂತೆ ಮೇಲೆ ಓದಲಾದ (4)ರಲ್ಲಿ ಆದೇಶ ಹೊರಡಿಸಲಾಗಿದೆ. ಮೇಲೆ (5)ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ ಪ್ರಥಮ ದರ್ಜೆ ಸಹಾಯಕ 15 ಖಾಲಿ ಹುದ್ದೆಗಳನ್ನು, ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಲ್ಲಿ 12 ಖಾಲಿ ಹುದ್ದೆಗಳನ್ನು ವಾಹನ ಚಾಲಕರ 1 ಹುದ್ದೆ ರದ್ದು ಪಡಿಸಲು, ಇಲೆಕ್ಟ್ರೀಷಿಯನ್/ಮೆಕ್ಯಾನಿಕ್ ವೃಂದಲ್ಲಿ 2 ಹುದ್ದೆಗಳನ್ನು ಹೆಚ್ಚುವರಿಯೆಂದು ಘೋಷಿಸಿ, ಈ ವೃಂದಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರಿಗೆ ಸ್ವಇಚ್ಛಾ ನಿವೃತ್ತಿ ಹೊಂದಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಇದನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ ಕಾಇ 10 ಇಟಿಎಂ 2002 ಬೆಂಗಳೂರು, ದಿ: 17ನೇ ಜನವರಿ 2006.**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿನ ತರಬೇತಿ ವಿಭಾಗದಲ್ಲಿನ ಪ್ರಥಮ ದರ್ಜೆ ಸಹಾಯಕರ 15 ಖಾಲಿ ಹುದ್ದೆಗಳನ್ನು, ದ್ವಿತೀಯ ದರ್ಜೆ ಸಹಾಯಕರ 12 ಖಾಲಿ ಹುದ್ದೆಗಳನ್ನು, ಚಾಲಕರ 1 ಹುದ್ದೆ ರದ್ದುಪಡಿಸಲು ತೀರ್ಮಾನಿಸಿದೆ. ಹುದ್ದೆಗಳ ವಿವರಗಳನ್ನು ಅನುಬಂಧದಲ್ಲಿ ಕೊಡಲಾಗಿದೆ. ಇಲೆಕ್ಟ್ರೀಷಿಯನ್/ಮೆಕ್ಯಾನಿಕ್ ವೃಂದದಲ್ಲಿ 2 ಹುದ್ದೆಗಳನ್ನು ಹೆಚ್ಚುವರಿಯೆಂದು ಘೋಷಿಸಿದೆ. ಆ ವೃಂದದಲ್ಲಿ ಕಾರ್ಯ ನಿರ್ವಹಿಸುತ್ತಿರುವ ನೌಕರರಿಗೆ ಸ್ವಇಚ್ಛಾ ನಿವೃತ್ತಿ ಹೊಂದಲೂ ಅದುವರೆಗೆ ಇಲಾಖೆಯಲ್ಲಿ ವೇತನ ಪಾವತಿಸಿ ಸ್ವಯಂ ನಿವೃತ್ತಿ ಹೊಂದಿದ ದಿನಾಂಕದಿಂದ ಆ ಹುದ್ದೆಗಳು ಸ್ವಯಂಚಾಲಿತವಾಗಿ ರದ್ದಾಗುತ್ತದೆ.

ಉಳಿದ ವೃಂದಗಳಲ್ಲಿ ಖಾಲಿ ಇದ್ದ ಹುದ್ದೆಗಳ ಪೈಕಿ ಶೇ.80ರಷ್ಟು ಹುದ್ದೆಗಳನ್ನು ರದ್ದುಪಡಿಸುವಿಕೆಯಿಂದ, ವಿನಾಯಿತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜ**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

ಸರ್ಕಾರಿ ಆದೇಶ ಸಂಖ್ಯೆ:ಕಾಇ 10 ಇಟಿಎಂ. 2002 ದಿನಾಂಕ 17/1/2006ರ
ಅನುಬಂಧ.

ಪ್ರಥಮ ದರ್ಜೆ ಸಹಾಯಕರು.

| ಕ್ರಮ ಸಂಖ್ಯೆ | ಕಛೇರಿ/ಕೈಗಾರಿಕಾ ತರಬೇತಿ ಸಂಸ್ಥೆ | ಹುದ್ದೆಗಳ ಸಂಖ್ಯೆ | ಷರಾ |
|---|---|---|---|
| 1 | 2 | 3 | 4 |
| 1 | ನಿರ್ದೇಶನಾಲಯ | 01 | ಖಾಲಿ ಇರುವ ಹುದ್ದೆ |
| 2 | ಕೈಗಾರಿಕಾ ತರಬೇತಿ ಸಂಸ್ಥೆ, ಹೊಸೂರು ರಸ್ತೆ, ಬೆಂಗಳೂರು-29. | 01 | ಖಾಲಿ ಇರುವ ಹುದ್ದೆ |
| 3 | ಕೈಗಾರಿಕಾ ತರಬೇತಿ ಸಂಸ್ಥೆ, ಕನಕಪುರ | 01 | ಖಾಲಿ ಇರುವ ಹುದ್ದೆ |
| 4 | ಕೈಗಾರಿಕಾ ತರಬೇತಿ ಸಂಸ್ಥೆ, ಹೊಳೆನರಸೀಪುರ | 01 | ಖಾಲಿ ಇರುವ ಹುದ್ದೆ |
| 5 | ಕೈಗಾರಿಕಾ ತರಬೇತಿ ಸಂಸ್ಥೆ, (ಪು), ಗುಲ್ಬರ್ಗಾ. | 01 | ಖಾಲಿ ಇರುವ ಹುದ್ದೆ |
| 6 | ಕೈಗಾರಿಕಾ ತರಬೇತಿ ಸಂಸ್ಥೆ, ಬಳ್ಳಾರಿ | 01 | ಖಾಲಿ ಇರುವ ಹುದ್ದೆ |
| 7 | ಕೈಗಾರಿಕಾ ತರಬೇತಿ ಸಂಸ್ಥೆ, ರಾಯಚೂರು | 01 | ಖಾಲಿ ಇರುವ ಹುದ್ದೆ |
| 8 | ಕೈಗಾರಿಕಾ ತರಬೇತಿ ಸಂಸ್ಥೆ, ರಾಮದುರ್ಗ | 01 | ಖಾಲಿ ಇರುವ ಹುದ್ದೆ |
| 9 | ಕೈಗಾರಿಕಾ ತರಬೇತಿ ಸಂಸ್ಥೆ, ಹುಬ್ಬಳ್ಳಿ | 01 | ಖಾಲಿ ಇರುವ ಹುದ್ದೆ |
| 10 | ಕೈಗಾರಿಕಾ ತರಬೇತಿ ಸಂಸ್ಥೆ, ಹಳಿಯಾಳ | 01 | ಖಾಲಿ ಇರುವ ಹುದ್ದೆ |
| 11 | ಕೈಗಾರಿಕಾ ತರಬೇತಿ ಸಂಸ್ಥೆ, ಬಿಜಾಪುರ | 01 | ಖಾಲಿ ಇರುವ ಹುದ್ದೆ |
| 12 | ಕೈಗಾರಿಕಾ ತರಬೇತಿ ಸಂಸ್ಥೆ, ನಾಲತ್‌ವಾಡ | 01 | ಖಾಲಿ ಇರುವ ಹುದ್ದೆ |
| 13 | ಕೈಗಾರಿಕಾ ತರಬೇತಿ ಸಂಸ್ಥೆ, ಬೀಳಗಿ | 01 | ಖಾಲಿ ಇರುವ ಹುದ್ದೆ |
| 14 | ಕೈಗಾರಿಕಾ ತರಬೇತಿ ಸಂಸ್ಥೆ, ಕೆ.ಜಿ.ಎಫ್. | 01 | ಖಾಲಿ ಇರುವ ಹುದ್ದೆ |
| 15 | ಕೈಗಾರಿಕಾ ತರಬೇತಿ ಸಂಸ್ಥೆ,(ಮ) ಗುಲ್ಬರ್ಗಾ. | 01 | ಖಾಲಿ ಇರುವ ಹುದ್ದೆ |
| | ಒಟ್ಟು | 15 | |

ದ್ವಿತೀಯ ದರ್ಜೆ ಸಹಾಯಕರು.

| ಕ್ರಮ ಸಂಖ್ಯೆ | ಕಛೇರಿ/ಕೈಗಾರಿಕಾ ತರಬೇತಿ ಸಂಸ್ಥೆ | ರದ್ದುಗೊಳಿಸ ಬಹುದಾದ ಹುದ್ದೆಗಳ ಸಂಖ್ಯೆ | ಷರಾ |
|---|---|---|---|
| 1 | 2 | 3 | 4 |
| 1. | ನಿದೇಶನಾಲಯ | 02 | |
| 2. | ಕೈಗಾರಿಕಾ ತರಬೇತಿ ಸಂಸ್ಥೆ, ಹೊಸಪೇಟೆ. | 01 | |
| 3. | ಕೈಗಾರಿಕಾ ತರಬೇತಿ ಸಂಸ್ಥೆ, ದೇವರಾಯ ಸಮುದ್ರ. | 01 | |
| 4. | ಕೈಗಾರಿಕಾ ತರಬೇತಿ ಸಂಸ್ಥೆ, ಕೂಡ್ಲಗಿ | 01 | |
| 5. | ಕೈಗಾರಿಕಾ ತರಬೇತಿ ಸಂಸ್ಥೆ, ಪೊನ್ನಂಪೇಟೆ | 02 | |
| 6. | ಕೈಗಾರಿಕಾ ತರಬೇತಿ ಸಂಸ್ಥೆ, ಮಂಗಳೂರು | 01 | |
| 7. | ಕೈಗಾರಿಕಾ ತರಬೇತಿ ಸಂಸ್ಥೆ,(ಪು), ಗುಲ್ಬರ್ಗಾ. | 01 | |
| 8. | ಕೈಗಾರಿಕಾ ತರಬೇತಿ ಸಂಸ್ಥೆ, ಮೈಸೂರು-8. | 01 | |
| 9. | ಕೈಗಾರಿಕಾ ತರಬೇತಿ ಸಂಸ್ಥೆ, ದೇವನಹಳ್ಳಿ. | 01 | |
| 10. | ವಿಭಾಗೀಯ ಕಛೇರಿ, ಮೈಸೂರು. | 01 | |
| | ಒಟ್ಟು | 12 | |

ವಾಹನ ಚಾಲಕರು.

| ಕ್ರಮ ಸಂಖ್ಯೆ | ಕಛೇರಿ/ಕೈಗಾರಿಕಾ ತರಬೇತಿ ಸಂಸ್ಥೆ | ರದ್ದುಗೊಳಿಸ ಬಹುದಾದ ಹುದ್ದೆಗಳ ಸಂಖ್ಯೆ | ಷರಾ |
|---|---|---|---|
| 1 | 2 | 3 | 4 |
| 1 | ಕೈಗಾರಿಕಾ ತರಬೇತಿ ಸಂಸ್ಥೇ, ಹೊಸೂರು ರಸ್ತೆ, ಬೆಂಗಳೂರು-29 | 01 | ಖಾಲಿ ಹುದ್ದೆ |
| | ಒಟ್ಟು | 01 | |

ಎಲೆಕ್ಟ್ರೀಷಿಯನ್/ಮೆಕ್ಯಾನಿಕ್

| ಕ್ರಮ ಸಂಖ್ಯೆ | ಕಛೇರಿ/ಕೈಗಾರಿಕಾ ತರಬೇತಿ ಸಂಸ್ಥೆ | ರದ್ದುಗೊಳಿಸ ಬಹುದಾದ ಹುದ್ದೆಗಳ ಸಂಖ್ಯೆ | ಷರಾ |
|---|---|---|---|
| 1 | 2 | 3 | 4 |
| 1 | ಕೈಗಾರಿಕಾ ತರಬೇತಿ ಸಂಸ್ಥೆ, ಹೊಸೂರು ರಸ್ತೆ, ಬೆಂಗಳೂರು-29. | 02 | ಹೆಚ್ಚುವರಿ ಹುದ್ದೆಯೆಂದು ಘೋಷಿಸಿದೆ. |
| | ಒಟ್ಟು | 02 | |

**ಎಂ.ಪಿ. ನಾಗರಾಜ**

ಪಿ.ಆರ್. 209 ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ**

**ವಿಷಯ:** ಶ್ರೀ.ಕೆ.ಟಿ.ತಿಮ್ಮಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ ಇವರ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ - ದೋಷಮುಕ್ತರನ್ನಾಗಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಪಂ, ಶಿವಮೊಗ್ಗ ಇವರ ಪತ್ರ ಸಂ:ಜಿಪಂಶಿ:ಸಿಬ್ಬಂದಿ (3) :ಇಂ:ವಿವ:16:04-05, ದಿ:6-7-04.
2) ಆದೇಶ ಸಂಖ್ಯೆ:ಗ್ರಾಅಪ:143:ಜಿಪಅ:04, ದಿ:11-1-2005.
3) ಕಾರಣ ಕೇಳುವ ನೋಟೀಸ್‌ನ ಸಂಖ್ಯೆ:ಗ್ರಾಅಪ 143 ಜಿಪಅ 04, ದಿ:19-1-2005.
4) ಆಪಾದಿತರ ಲಿಖಿತ ಹೇಳಿಕೆ ದಿ:3-2-2005.
5) ಸರ್ಕಾರದ ಆದೇಶ ಸಂ:ಗ್ರಾಅಪ 143:ಜಿಪಅ:04, ದಿ:10-3-2005.
6) ಸರ್ಕಾರದ ಆದೇಶ ಸಂ:ಗ್ರಾಅಪ 143:ಜಿಪಅ 04, ದಿ:20-6-2005.
7) ಉಪ ಕಾರ್ಯದರ್ಶಿ (ಆಡಳಿತ), ಜಿ.ಪಂ, ಶಿವಮೊಗ್ಗ ಇವರ ವಿಚಾರಣಾ ವರದಿ ದಿ:27-8-05.

ಶ್ರೀ.ಕೆ.ಟಿ.ತಿಮ್ಮಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಶಿವಮೊಗ್ಗ ಇವರು ದಿ:4-6-2004 ರಂದು ನಡೆದ ಶಿವಮೊಗ್ಗ ತಾಲ್ಲೂಕು ಪಂಚಾಯತ್ ನ ಸಾಮಾನ್ಯ ಸಭೆಗೆ ಇವರು ಗೈರು ಹಾಜರಾಗುತ್ತಿದ್ದು, ಇದರಿಂದ ತಾಲ್ಲೂಕಿಗೆ ಸಂಬಂಧಿಸಿದ ವಿವಿಧ ಯೋಜನೆಗಳ ಕ್ರಿಯಾ ಯೋಜನೆಗಳಡಿ ಅನುಮೋದನೆಯಾದ ರಸ್ತೆ ಕುಡಿಯುವ ನೀರಿನ ಮತ್ತು ಮತ್ತಿತರ ಕಾಮಗಾರಿಗಳ ಬಗ್ಗೆ ಸಭೆಯಲ್ಲಿ ಜನಪ್ರತಿನಿಧಿಗಳಿಗೆ ಸರಿಯಾದ ಮಾಹಿತಿ ನೀಡದಿರುವಂತಾಗಿ, ಇವರು ತಾಲ್ಲೂಕು ಪಂಚಾಯತ್ ನ ಪ್ರತಿ ಸಭೆಗಳಿಗೂ ಕೂಡ ಗೈರುಹಾಜರಾಗುತ್ತಿರುವ ವಿಷಯವು ಸಭೆಗಳಲ್ಲಿ ಚರ್ಚೆಯಾಗಿ, ಸದರಿಯವರ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳಲು ಸಭೆಯ ನಡವಳಿಯ ತೀರ್ಮಾನದ ಪ್ರಕಾರ ಅಗತ್ಯ ಕ್ರಮ ಕೈಗೊಳ್ಳುವಂತೆ ಶಿವಮೊಗ್ಗ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿಯವರು ಸಲ್ಲಿಸಿದ್ದ ವರದಿಯ ಮೇಲೆ ಸದರಿಯವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಶಿವಮೊಗ್ಗ ಜಿಲ್ಲಾ ಪಂಚಾಯತ್ ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರ ಮೇಲೆ ಓದಲಾದ ಕ್ರಮ ಸಂ:(1)ರ ಪತ್ರದಲ್ಲಿ ಸರ್ಕಾರಕ್ಕೆ ವರದಿ ಸಲ್ಲಿಸಿದ್ದರು.

ಈ ಸಂಬಂಧ ಸರ್ಕಾರವು ಪರಿಶೀಲಿಸಿ, ಮೇಲೆ ಓದಲಾದ ಕ್ರಮ ಸಂ.(2)ರ ಆದೇಶದ ಪ್ರಕಾರ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಇವರ ಸೇವೆಯನ್ನು ಅಮಾನತ್ತು ಗೊಳಿಸಲಾಗಿತ್ತು.

ತದನಂತರ ಇವರಿಗೆ ಅನುಬಂಧ-1 ರಿಂದ 4 ರಲ್ಲಿ ದೋಷಾರೋಪಣೆಯೊಡನೆ ಕಾರಣ ಕೇಳುವ ನೋಟೀಸಿನೊಂದಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಪ್ರಕಾರ ಜಾರಿ ಮಾಡಲಾಗಿ, ಸದರಿಯವರು ಲಿಖಿತ ಉತ್ತರ ನೀಡಿ ತನ್ನ ಮೇಲಿನ ಆರೋಪವನ್ನು ನಿರಾಕರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಪತ್ರದಲ್ಲಿ ಲಿಖಿತ ಹೇಳಿಕೆ ಸಲ್ಲಿಸಿದ್ದರು.

ನಂತರ ಶ್ರೀ.ಕೆ.ಟಿ.ತಿಮ್ಮಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಇವರ ಸೇವೆಯ ಅಮಾನತ್ತನ್ನು ತೆರವುಗೊಳಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿ, ಇವರನ್ನು ಅವರ ಮಾತೃ ಇಲಾಖೆಯಾದ ಲೋಕೋಪಯೋಗಿ ಇಲಾಖೆಗೆ ಹಿಂದಿರುಗಿಸಿ ಮೇಲೆ ಓದಲಾದ ಕ್ರ.ಸಂ.(5)ರಲ್ಲಿ ಆದೇಶಿಸಲಾಗಿತ್ತು. ಆಪಾದಿತ ಅಧಿಕಾರಿಯವರು ತಮ್ಮ ಮೇಲಿನ ದೋಷಾರೋಪಣೆಗಳನ್ನು ನಿರಾಕರಿಸಿದ್ದರಿಂದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಲು ಉಪ ಕಾರ್ಯದರ್ಶಿ (ಆಡಳಿತ), ಜಿ.ಪಂ, ಶಿವಮೊಗ್ಗ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ:(6) ರಲ್ಲಿ ಆದೇಶಿಸಲಾಗಿತ್ತು.ಅದರಂತೆ, ವಿಚಾರಣಾಧಿಕಾರಿಯವರು ಪ್ರಕರಣದಲ್ಲಿ ವಿವರವಾದ ವಿಚಾರಣೆಯನ್ನು ನಡೆಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ತಮ್ಮ ಪತ್ರದಲ್ಲಿ ವರದಿಯನ್ನು ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಯವರು ವರದಿ ಸಲ್ಲಿಸುತ್ತಾ ಆರೋಪದಲ್ಲಿ ಹೇಳಿರುವಂತೆ, ಆಪಾದಿತ ಅಧಿಕಾರಿಯು ದಿ:4-6-2004ರ ಶಿವಮೊಗ್ಗ ತಾಲ್ಲೂಕು ಪಂಚಾಯತ್ ನ ಸಾಮಾನ್ಯ ಸಭೆಗೆ ಗೈರು ಹಾಜರಾಗಿರುವುದು ನಿಜವಾಗಿದ್ದರೂ ಸಹ, ಅವರು ಆ ದಿನ ಅನಾರೋಗ್ಯದ ಕಾರಣ ಸಾಂದರ್ಭಿಕ ರಜೆ ಮೇಲಿದ್ದ ಕಾರಣ ಕೈಮೀರಿದ ಸಂದರ್ಭವಾಗಿದ್ದರಿಂದ ಗೈರು ಹಾಜರಾಗಿರುತ್ತಾರೆ. ಹಾಗಂತ ಅವರು ಕರ್ತವ್ಯ ನಿರ್ಲಕ್ಷ ಮಾಡಿದ್ದಾರೆ ಎಂದು ಪರಿಗಣಿಸಲು ಬರುವುದಿಲ್ಲ. ಏಕೆಂದರೆ ಅವರು ರಜೆ ಮಂಜೂರಾತಿಗೆ ರಜೆ ಅರ್ಜಿಯನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಜೊತೆಗೆ ಅವರ ಗೈರು ಹಾಜರಿಯಿಂದ ಸರ್ಕಾರಿ ಕೆಲಸಕ್ಕೆ ತೊಂದರೆ ಆಗದಂತೆ ಶ್ರೀ.ಟಿ.ಮಧುಕುಮಾರ್ ,ಸಹಾಯಕ ಇಂಜಿನಿಯರ್, ಅವರನ್ನು ದೈನಂದಿನ ಕೆಲಸ ನಿರ್ವಹಿಸಲು ವ್ಯವಸ್ಥೆ ಮಾಡಿರುತ್ತಾರೆ ಮತ್ತು ಸದರಿ ಅಧಿಕಾರಿಯವರು ದಿ:4-6-2004ರ ಸಭೆಗೆ ಹಾಜರಾಗಿರುತ್ತಾರೆ. ಅಂದಿನ ಸಭೆಯಲ್ಲಿ ಆಪಾದಿತ ಅಧಿಕಾರಿಯ ಗೈರು ಹಾಜರಿ ಬಗ್ಗೆ ಪ್ರಸ್ತಾಪಿಸಲಾಗಿದೆಯೇ ವಿನಹ ಅವರ ಗೈರುಹಾಜರಿಯಿಂದ ಆ ಇಲಾಖೆಗೆ ಸಂಬಂಧಿಸಿದಂತೆ ಸದಸ್ಯರ ಯಾವ ಪ್ರಶ್ನೆಗಳಿಗೆ/ಸಮಸ್ಯೆಗಳಿಗೆ ಪ್ರತಿ ನಿಯೋಜಿತ ಅಧಿಕಾರಿಯಿಂದ ಉತ್ತರ/ಸಮಜಾಯಿಷಿ ದೊರೆಯಲಿಲ್ಲ ಹಾಗೂ ಸಾರ್ವಜನಿಕರ ಯಾವ ಕೆಲಸಗಳಿಗೆ ತೊಂದರೆಯಾಗಿಲ್ಲ ಎಂಬ ವಿಷಯವೇ ಪ್ರಸ್ತಾಪಕ್ಕೆ ಬಂದಿರುವುದಿಲ್ಲ. ಅಂದರೆ, ಅವರ ಗೈರು ಹಾಜರಿ ವಿಷಯವನ್ನೇ ಕೇಂದ್ರೀಕರಿಸಲಾಗಿದೇ ವಿನಹ ಬೇರೇನೂ ಇಲ್ಲ ಎಂಬುದು ಖಚಿತಪಡುತ್ತದೆ. ಆಪಾದಿತ ಅಧಿಕಾರಿಯು ತನ್ನ ಗೈರು ಹಾಜರಿಯ ಕುರಿತು ನೀಡಿರುವ ಹೇಳಿಕೆ ಮತ್ತು ದಸ್ತಾವೇಜುಗಳನ್ನು ನಂಬುಲು ಸಹಜವಾಗಿ ಮತ್ತು ವಾಸ್ತವವಾಗಿ ಕಂಡು ಬಂದಿರುತ್ತದೆ. ಆದುದರಿಂದ, ಆಪಾದಿತ ಅಧಿಕಾರಿ ಮೇಲೆ ಹೊರಿಸಿದ ಆರೋಪವು ರುಜುವಾತಾಗಲಿಲ್ಲ ಎಂದು ಅಭಿಪ್ರಾಯ ಪಟ್ಟಿರುತ್ತಾರೆ.

ವಿಚಾರಣಾಧಿಕಾರಿಯವರ ವರದಿಯನ್ನು ಒಪ್ಪಿಕೊಂಡು ಸರ್ಕಾರವು ಈ ಮುಂದಿನಂತೆ ಆದೇಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 143 ಜಿಪಅ 04, ಬೆಂಗಳೂರು, ದಿ: 1 ನೇ ಫೆಬ್ರವರಿ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಈ ಪ್ರಕರಣದಲ್ಲಿ ಸರ್ಕಾರವು ಶ್ರೀ.ಕೆ.ಟಿ. ತಿಮ್ಮಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ ಅವರ ಮೇಲೆ ಹೊರಿಸಲಾದ ಆರೋಪಗಳಿಂದ ಅವರನ್ನು ದೋಷಮುಕ್ತರನ್ನಾಗಿಸಿ ಆದೇಶಿಸಿದೆ.

ಈ ಪ್ರಕರಣದ ಮಟ್ಟಿಗೆ ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ, ಶ್ರೀ.ಕೆ.ಟಿ. ತಿಮ್ಮಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ, ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 230

**ಎಸ್.ಸಿ. ಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.